# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1796

ಸದಸ್ಯರ ಹೆಸರು : ಶ್ರೀ ಮಂಜುನಾಥ ಭಂಡಾರಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 15-03-2022

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪೋಷಣಾ ಅಭಿಯಾನ ಕಾರ್ಯಕ್ರಮದ ಗುರಿ ಮತ್ತು ಉದ್ದೇಶಗಳು ಯಾವುವು; ಈ ಕಾರ್ಯಕ್ರಮದಡಿಯಲ್ಲಿ ಯಾವ ಯಾವ ಚಟುವಟಿಗಳನ್ನು ನಡೆಸಲಾಗುತ್ತಿದೆ; ಈ ಕಾರ್ಯಕ್ರಮದಡಿಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಸಪಾಲು ಎಷ್ಟು; ಈ ಕಾರ್ಯ ಕ್ರಮದಡಿಯಲ್ಲಿ ಮಂಜೂರಾದ ಬಿಡುಗಡೆಯಾದ ಮತ್ತು ಬಾಕಿಯಿರುವ ಅನುದಾನವೆಷ್ಟು; | ಪೋಷಣಾ ಅಭಿಯಾನ ಯೋಜನೆಯ ಗುರಿ ಮತ್ತು ಉದ್ದೇಶಗಳು ಈ ಕೆಳಗಿನಂತಿವೆ.<br>• 0-6 ವರ್ಷದ ಮಕ್ಕಳಲ್ಲಿನ ಕುಂಠಿತ ಬೆಳವಣಿಗೆಯನ್ನು ತಡೆಗಟ್ಟುವಿಕೆ.<br>• 0-6 ವರ್ಷದ ಮಕ್ಕಳ ಅಪೌಷ್ಠಿಕತೆಯನ್ನು ತಡೆಗಟ್ಟುವಿಕೆ ಮತ್ತು ರಕ್ತಹೀನತೆಯ ಪ್ರಮಾಣವನ್ನು ಕಡಿಮೆಗೊಳಿಸುವುದು.<br>• 15-49 ವಯಸ್ಸಿನ ಹದಿಹರೆಯದ ಹೆಣ್ಣು ಮಕ್ಕಳಲ್ಲಿ ಮತ್ತು ಮಹಿಳೆಯರಲ್ಲಿ ರಕ್ತಹೀನತೆಯನ್ನು ತಡೆಗಟ್ಟುವುದು.<br>• ಕಡಿಮೆ ತೂಕವುಳ್ಳ ಮಕ್ಕಳ ಜನನ ಪ್ರಮಾಣದ ನಿಯಂತ್ರಣ.<br>• ಸದರಿ ಉದ್ದೇಶಗಳನ್ನು ಅನುಷ್ಠಾನಗೊಳಿಸಲು ಈ ಯೋಜನೆಯಡಿ ಸಮುದಾಯ ಆಧಾರಿತ ಅರಿವು ಕಾರ್ಯಕ್ರಮಗಳಿಂದ ಪೌಷ್ಟಿಕ ಆಹಾರ ಸೇವನೆಯ ಪ್ರಾಮುಖ್ಯತೆ ಮತ್ತು ಮಗುವಿನ 1000 ದಿನಗಳ ಆರೈಕೆಯ ಮಾಹಿತಿಯನ್ನು ಒದಗಿಸಲಾಗುತ್ತಿದೆ.<br><br>ಪೋಷಣಾ ಅಭಿಯಾನ ಯೋಜನೆಯ ಸಮರ್ಪಕ ಅನುಷ್ಠಾನಕ್ಕಾಗಿ ಈ ಕೆಳಕಂಡ ಕಾರ್ಯಕ್ರಮ ಮತ್ತು ಚಟುವಟಿಕೆಗಳನ್ನು ಕೈಗೊಳ್ಳಲಾಗಿರುತ್ತದೆ.<br><br>ರಾಜ್ಯದ ಎಲ್ಲಾ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಮೇಲ್ವಿಚಾರಕಿಯರಿಗೆ ಸ್ಮಾರ್ಟ್ ಫೋನ್‌ಗಳನ್ನು ವಿತರಿಸಲಾಗಿದ್ದು, ಸದರಿ ಸ್ಮಾರ್ಟ್ ಫೋನ್‌ಗಳಲ್ಲಿನ ಪೋಷಣ್ ಟ್ರ್ಯಾಕರ್ ಅಪ್ಲಿಕೇಶನ್ ಮೂಲಕ ಅಂಗನವಾಡಿ ಕೇಂದ್ರಗಳ ಎಲ್ಲಾ ಫಲಾನುಭವಿಗಳ ವಿವರಗಳನ್ನು ದಾಖಲಿಸಲಾಗುತ್ತದೆ. |

| | | |
|---|---|---|
| | | ರಾಜ್ಯದ ಎಲ್ಲಾ ಅಂಗನವಾಡಿ ಕೇಂದ್ರಗಳಿಗೆ Infant and Mother Weighing Scale, Infantometer and Stadiometer ಗಳನ್ನು ಒದಗಿಸಲಾಗಿದ್ದು ಸದರಿ ಸಾಧನಗಳ ಮೂಲಕ ಗರ್ಭಿಣಿ, ಬಾಣಂತಿಯರು ಮತ್ತು ಮಕ್ಕಳ ತೂಕ ಮತ್ತು ಎತ್ತರವನ್ನು ಅಳೆದು ಪೌಷ್ಟಿಕದ ಮಟ್ಟವನ್ನು ಗುರುತಿಸಲಾಗುತ್ತದೆ.<br><br>ಪ್ರತಿವರ್ಷ ಜನಾಂದೋಲನ ಚಟುವಟಿಕೆಗಳನ್ನು ಸೆಪ್ಟೆಂಬರ್ ತಿಂಗಳಲ್ಲಿ ಪೋಷಣ್ ಮಾಸಾಚರಣೆ ಮತ್ತು ಮಾರ್ಚ್ ತಿಂಗಳಲ್ಲಿ ಪೋಷಣ್ ಪಕ್ವಾಡ್ ಕಾರ್ಯಕ್ರಮಗಳನ್ನು ಆಚರಿಸಲಾಗುತ್ತದೆ. ಈ ಕಾರ್ಯಕ್ರಮಗಳ ಮೂಲಕ ಜನರಲ್ಲಿ ಅಪೌಷ್ಟಿಕತೆಯ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.<br><br>ಪೋಷಣಾ ಅಭಿಯಾನ ಯೋಜನೆಯಡಿ ರಾಜ್ಯದ ಎಲ್ಲಾ ಅಂಗನವಾಡಿಗಳಲ್ಲಿ ಸಮುದಾಯ ಆಧಾರಿತ ಚಟುವಟಿಕೆಗಳನ್ನು ಪ್ರತಿ ತಿಂಗಳ ಮೊದಲ ಮತ್ತು ಮೂರನೇ ಶುಕ್ರವಾರ ನಡೆಸಲಾಗುತ್ತದೆ.ಇದರ ಮೂಲಕ ತಾಯಂದಿಯರಿಗೆ ಅರಿವು ಮೂಡಿಸಲಾಗುತ್ತಿದೆ. ವಿವಿಧ ಇಲಾಖೆಗಳ ಸಹಯೋಗದೊಂದಿಗೆ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಪೋಷಣಾ ಅಭಿಯಾನ ಯೋಜನೆಯಲ್ಲಿ ರಾಜ್ಯದ ಪಾಲು 40% ಮತ್ತು ಕೇಂದ್ರದ ಪಾಲು 60% ಇರುತ್ತದೆ.<br><br>ಪೋಷಣಾ ಅಭಿಯಾನ ಯೋಜನೆಗೆ 2021-22 ನೇ ಸಾಲಿನಲ್ಲಿ ರೂ.8500.00 ಲಕ್ಷಗಳು ನಿಗದಿಯಾಗಿದ್ದು, ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. |
| ಆ) | ಈ ಅಭಿಯಾನದಡಿಯಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ಸೀರೆ ಖರೀದಿಗೆ ಮಾಡಲಾದ ವೆಚ್ಚವೆಷ್ಟು; ಈ ಸೀರೆಯ ವಿನ್ಯಾಸಕ್ಕೆ ಅನುಮೋದನೆಯನ್ನು ನೀಡಿದ ಸಕ್ಷಮ ಪ್ರಾಧಿಕಾರ ಯಾರು; ಈ ಕಾರ್ಯಕ್ರಮದಡಿಯಲ್ಲಿ ಖರೀದಿಸಿದ ವಿತರಿಸಿದ ಮತ್ತು ವಿತರಣೆಗೆ ಬಾಕಿಯಿರುವ ಸೀರೆಗಳ ಸಂಖ್ಯೆ ಎಷ್ಟು; | ಪೋಷಣ್ ಅಭಿಯಾನ ಯೋಜನೆಯಡಿ ಒಂದು ಸೀರೆಗೆ ರೂ. 385.75/- ರಂತೆ ಒಟ್ಟು ಮೊತ್ತ, ರೂ.9,91,30,806.50/- ಗಳಲ್ಲಿ 2,56,982 ಸೀರೆಗಳನ್ನು ಖರೀದಿ ಮಾಡಲಾಗಿರುತ್ತದೆ.<br><br>ದಿನಾಂಕ: 04/09/2020ರ ಕೇಂದ್ರ ಸರ್ಕಾರದ ಮಾರ್ಗಸೂಚಿಯ ಷರತ್ತಿನಲ್ಲಿ ಸದರಿ ಯೋಜನೆಯಡಿ ಅಂಗನವಾಡಿ ಕಾರ್ಯಕರ್ತೆಯರಿಗೆ ಮತ್ತು ಸಹಾಯಕಿಯರಿಗೆ ನೀಡುವ ಸಮವಸ್ತ್ರದಲ್ಲಿ "ಪೋಷಣ್ ಅಭಿಯಾನ"ದ ಲೋಗೊ ವನ್ನು ಮುದ್ರಿಸಲು ತಿಳಿಸಲಾಗಿರುತ್ತದೆ.<br><br>ಸದರಿ ಕಾರ್ಯಕ್ರಮದಡಿಯಲ್ಲಿ ಒಟ್ಟು 256982 ಸೀರೆಗಳನ್ನು ಅಂಗನವಾಡಿ ಕಾರ್ಯಕರ್ತೆಯರಿಗೆ ವಿತರಿಸಲಾಗಿರುತ್ತದೆ. |

| | | |
|---|---|---|
| ಇ) | ಅಂಗನವಾಡಿ ಕಾರ್ಯಕರ್ತೆಯರು ಈ ಸೀರೆಯಲ್ಲಿ ಪೋಷಣೆ ಅಭಿಯಾನ ಎಂದು ದೊಡ್ಡದಾಗಿ ಮುದ್ರಿಸಿದ್ದು, ಅಭಿಯಾನದ ಮುದ್ರೆ ಹೂಗಳ ವಿನ್ಯಾಸದಲ್ಲಿರುವುದರಿಂದ ಬ್ಯಾನರ್ ನಂತೆ ತೋರುತ್ತಿದ್ದು, ಅಂತಹ ಸೀರೆಗಳನ್ನು ಪಡೆಯಲು ನಿರಾಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ಕೈಗೊಂಡ ಕ್ರಮಗಳೇನು? | ಪೋಷಣ್ ಅಭಿಯಾನ ಯೋಜನೆಯಡಿ ವಿತರಿಸಿರುವ ಸೀರೆಗಳನ್ನು ಧರಿಸಲು ಅಂಗನವಾಡಿ ಕಾರ್ಯಕರ್ತರು ವಿರೋಧಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು ಈ ಬಗ್ಗೆ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ವಿವಿಧ ಸಂಘಗಳೊಂದಿಗೆ ಸಭೆ ನಡೆಸಿ ಸಮವಸ್ತ್ರದ ಕುರಿತಾಗಿ ಕೇಂದ್ರ ಸರ್ಕಾರವು ನೀಡಿರುವ ಮಾರ್ಗಸೂಚಿ ಮತ್ತು ಷರತ್ತುಗಳ ಬಗ್ಗೆ ಮನದಟ್ಟು ಮಾಡಲಾಗಿರುತ್ತದೆ. |

**ಸಂ:** ಮಮಇ 116 ಐಸಿಡಿ 2022

Halappa

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.